ಸದನದಲ್ಲಿ ಉತ್ತರಿಸುವ ಪ್ರಶ್ನೆ



**ಕರ್ನಾಟಕ ವಿಧಾನ ಪರಿಷತ್ತು**

ನೂರ ನಲವತ್ತೊಂದನೆಯ ಅಧಿವೇಶನ

ಮಂಗಳವಾರ, ದಿನಾಂಕ: 29ನೇ ಸೆಪ್ಟೆಂಬರ್, 2020

ಬಿಪಿಎಲ್ ಪಡಿತರ ಚೀಟಿಯಲ್ಲಿನ ವಿತರಣೆಯ ವಿಳಂಬದಿಂದ ಆಗುತ್ತಿರುವ ಸಮಸ್ಯೆ ಬಗ್ಗೆ

ಶ್ರೀ ಮೋಹನ್ ಕುಮಾರ್ ಕೊಂಡಜ್ಜಿ (ನಾಮನಿರ್ದೇಶನ ಹೊಂದಿದವರು) -

100 (1064) ಆಹಾರ ಮತ್ತು ನಾಗರಿಕ ಸರಬರಾಜು ಹಾಗೂ ಗ್ರಾಹಕರ ವ್ಯವಹಾರಗಳ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ರಾಜ್ಯದಲ್ಲಿರುವ ಒಟ್ಟು ಕುಟುಂಬಗಳ ಸಂಖ್ಯೆ ಎಷ್ಟು; ಅವುಗಳಲ್ಲಿ ಎಪಿಎಲ್ ಪಡಿತರ, ಬಿಪಿಎಲ್ ಪಡಿತರ ಮತ್ತು ಅಂತ್ಯೋದಯ ಪಡಿತರದಾರ ಕುಟುಂಬಗಳ ಸಂಖ್ಯೆ ಎಷ್ಟು; (ಜಿಲ್ಲಾವಾರು, ತಾಲ್ಲೂಕುವಾರು ಮಾಹಿತಿಯನ್ನು ನೀಡುವುದು)

(ಆ) ರಾಜ್ಯದಲ್ಲಿ ಕಳೆದ ಮೂರು ವರ್ಷಗಳಲ್ಲಿ ಬಿಪಿಎಲ್ ಪಡಿತರ ಚೀಟಿಗೆ ಹೊಸದಾಗಿ ಅರ್ಜಿಸಲ್ಲಿಸಿದ ಕುಟುಂಬಗಳ ಸಂಖ್ಯೆ ಎಷ್ಟು; ಅವುಗಳಲ್ಲಿ ವಿತರಿಸಲಾದ ಪಡಿತರ ಚೀಟಿಗಳ ಸಂಖ್ಯೆ ಎಷ್ಟು; ವಿತರಣೆಗೆ ಬಾಕಿಯಿರುವ ಅರ್ಜಿಗಳ ಸಂಖ್ಯೆ ಎಷ್ಟು; (ಜಿಲ್ಲಾವಾರು, ತಾಲ್ಲೂಕುವಾರು ಮಾಹಿತಿ ನೀಡುವುದು) ಈ ಪಡಿತರ ಚೀಟಿ ವಿತರಣೆ ಪೂರ್ಣಗೊಳಿಸಲು ಇಲಾಖೆಯ ಕಾಲಮಿತಿ ಯಾವುದು;

(ಇ) ರಾಜ್ಯದಲ್ಲಿ ಹೊಸದಾಗಿ ಬಿಪಿಎಲ್ ಪಡಿತರ ಚೀಟಿಗೆ ಅರ್ಜಿ ಸಲ್ಲಿಸುವುದನ್ನು ಮತ್ತು ಪಡಿತರ ಚೀಟಿಯ ವಿತರಣೆಯನ್ನು ಸ್ಥಗಿತಗೊಳಿಸಿರುವುದರಿಂದ ಪಡಿತರ ಸಂಧ್ಯಾ ಸುರಕ್ಷಾ, ವೈದ್ಯಕೀಯ ವಸತಿ ಯೋಜನೆ ಮುಂತಾದ ಫಲಾನುಭವಿ ಆಧಾರಿತ ಕಲ್ಯಾಣ ಯೋಜನೆಗಳಿಗೆ ಅರ್ಜಿ ಸಲ್ಲಿಸಲು ಆಗುತ್ತಿರುವ ತೊಂದರೆಯನ್ನು ತಪ್ಪಿಸಲು ಸರ್ಕಾರದ ಕ್ರಮವೇನು;

(ಈ) ಕೋವಿಡ್-19 ಕಾರಣದಿಂದ ಬಯೋ ಮೆಟ್ರಿಕ್ ಪದ್ಧತಿಯ ಬದಲಿಗೆ ಆಧಾರ್ ಕಾರ್ಡ್ ಆಧಾರಿತ ಮೊಬೈಲ್ ಒಟಿಪಿಯ ಮೂಲಕ ಹೊಸ ಅರ್ಜಿ ಸ್ವೀಕಾರದ ಕುರಿತು ಸರ್ಕಾರದ ಕ್ರಮವೇನು? (ಮಾಹಿತಿ ನೀಡುವುದು)